# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ಮೊದಲನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಮಂಗಳವಾರ, ದಿನಾಂಕ 11ನೇ ಜೂನ್, 2013
(ಸಮಯ: ಬೆಳಗ್ಗೆ 11.00 ಗಂಟೆಗೆ)

-----

**1. ಘನತೆವೆತ್ತ ರಾಜ್ಯಪಾಲರ ಭಾಷಣಕ್ಕೆ ಸಂಬಂಧಿಸಿದ ವಂದನಾರ್ಪಣಾ ಪ್ರಸ್ತಾವ**

ಶ್ರೀ ಬಸವರಾಜ ರಾಯರೆಡ್ಡಿ, ಅವರು ದಿನಾಂಕ: 04ನೇ ಜೂನ್, 2013ರಂದು ಸೂಚಿಸಿದ ಕೆಳಕಂಡ ಪ್ರಸ್ತಾವದ ಮೇಲೆ ಮುಂದುವರೆದ ಚರ್ಚೆ.

"2013ರ ಜೂನ್, 3ರಂದು ವಿಧಾನಮಂಡಲದ ಉಭಯ ಸದನಗಳ ಸದಸ್ಯರನ್ನುದ್ದೇಶಿಸಿ ದಯಪಾಲಿಸಿದ ಭಾಷಣಕ್ಕಾಗಿ ಈ ಅಧಿವೇಶನದಲ್ಲಿ ಸೇರಿರುವ ವಿಧಾನಸಭೆಯ ಸದಸ್ಯರಾದ ನಾವು ಘನತೆವೆತ್ತ ರಾಜ್ಯಪಾಲರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸಲು ಅಪ್ಪಣೆ ಕೋರುತ್ತೇವೆ"

**(ಐದನೇ ದಿನ)**

**2. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ**

1. ಶ್ರೀಯುತರುಗಳಾದ ಕೆ.ಆರ್. ರಮೇಶ್‌ಕುಮಾರ್, ಎನ್.ಹೆಚ್. ಶಿವಶಂಕರರೆಡ್ಡಿ, ಎಂ. ರಾಜಣ್ಣ, ಜಿ.ಕೆ. ಕೃಷ್ಣಾರೆಡ್ಡಿ, ಕೆ.ಎಸ್. ಮಂಜುನಾಥಗೌಡ, ಜಿ. ಮಂಜುನಾಥ ಹಾಗೂ ಇತರರು ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಕುಡಿಯುವ ನೀರಿನ ಸಮಸ್ಯೆ ಮತ್ತು ಕುಸಿಯುತ್ತಿರುವ ಅಂತರ್ಜಲ ಹಾಗೂ ಇದರ ನಿವಾರಣೆಗಾಗಿ ಹಮ್ಮಿಕೊಳ್ಳಬೇಕಾದ "ಶಾಶ್ವತ ನೀರಾವರಿ" ಯೋಜನೆ ವಿಚಾರದಲ್ಲಿ ನೀಡಿರುವ ಸೂಚನೆ ಬಗ್ಗೆ ಚರ್ಚೆ.

2. ಶ್ರೀಯುತರುಗಳಾದ ಕೆ.ಶಿವಮೂರ್ತಿ, ಕ್ಯಾತಸಂದ್ರ ಎನ್. ರಾಜಣ್ಣ ಮತ್ತು ಜಿ. ರಾಮಕೃಷ್ಣ, ಅವರುಗಳು ರಾಜ್ಯದಲ್ಲಿರುವ ಕಂದಾಯ ರಹಿತ ಗ್ರಾಮಗಳನ್ನು ಕಂದಾಯ ಗ್ರಾಮಗಳನ್ನಾಗಿ ಪರಿವರ್ತನೆ ಮಾಡುವುದು ಹಾಗೂ ಯೋಜನಾ ಆಯೋಗದಿಂದ ನೇರವಾಗಿ ಹಣ ತೊಡಗಿಸುವ ಕಂದಾಯ ರಹಿತ ಗ್ರಾಮಗಳಿಗೆ ಗ್ರಾಮ ಸಭೆ ನಡೆಸಲು ಮೂಲಭೂತ ಸೌಲಭ್ಯ ದೊರಕಿಸುವ ವಿಚಾರದಲ್ಲಿ ನೀಡಿರುವ ಸೂಚನೆಯ ಬಗ್ಗೆ ಚರ್ಚೆ.

**ಪಿ.ಓಂಪ್ರಕಾಶ**
ಕಾರ್ಯದರ್ಶಿ

Raj N

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.
(www.kar.nic.in/kla)